

ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1266 |
| ಸದಸ್ಯರ ಹೆಸರು | ಶ್ರೀ ನಸೀರ್ ಅಹ್ಮದ |
| ಉತ್ತರಿಸಬೇಕಾದ ದಿನಾಂಕ | 22.09.2021 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ವಿವಿಧ ವೃಂದದ ಹುದ್ದೆಗಳನ್ನು ಸಂವಿಧಾನದ 371ಜೆ ಅನ್ವಯ ವರ್ಗೀಕರಿಸಲಾಗಿದೆಯೇ; ಹಾಗಿದ್ದಲ್ಲಿ ಅದರ ಪ್ರತಿ ನೀಡುವುದು; | ವರ್ಗೀಕರಿಸಲಾಗಿದೆ. (ಅನುಬಂಧ-1ರಲ್ಲಿ ಲಗತ್ತಿಸಿದೆ) |
| ಆ | ಕಂದಾಯ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ವೃಂದದ ನೌಕರರನ್ನು ಸಂವಿಧಾನದ 371 ಜೆ ಅನ್ವಯ ಸ್ಥಳೀಯ ವೃಂದ ಹಾಗೂ ಮಿಕ್ಕುಳಿದ ವೃಂದದ ಪ್ರತ್ಯೇಕ ಜೇಷ್ಠತಾ ಪಟ್ಟಿ ತಯಾರಿಸಲಾಗಿದೆಯೇ; ಹಾಗಿದ್ದಲ್ಲಿ ಯಾವ ವರ್ಷ ತಯಾರಿಸಲಾಗಿದೆ; (ಕಂದಾಯ ಇಲಾಖೆಯ ವಿವಿಧ ಹುದ್ದೆಗಳ ಜೇಷ್ಠತಾ ಪಟ್ಟಿ ನೀಡುವುದು) | ಕಂದಾಯ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ಸ್ಥಳೀಯ ಹಾಗೂ ಮಿಕ್ಕುಳಿದ ವೃಂದದ ಪ್ರತ್ಯೇಕ ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗಿದೆ. (ಅನುಬಂಧ-2ರಲ್ಲಿ ಲಗತ್ತಿಸಿದೆ)<br><br>ತಹಶೀಲ್ದಾರ್ ಗ್ರೇಡ್-1 ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿ ತಯಾರಿಸಲು ಕ್ರಮವಹಿಸಲಾಗುತ್ತಿದೆ. |
| ಇ | ಕಂದಾಯ ಇಲಾಖೆಯಲ್ಲಿ ಸಂವಿಧಾನದ 371 ಜೆ ಮೀಸಲಾತಿ ಅನ್ವಯ ಸ್ಥಳೀಯ ವೃಂದದ ತಹಶೀಲ್ದಾರ್ ಗ್ರೇಡ್-2 ಹುದ್ದೆಯಿಂದ ತಹಶೀಲ್ದಾರ್ ಗ್ರೇಡ್-1 ಹುದ್ದೆಗೆ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಂವಿಧಾನದ 371 ಜೆ ಜಾರಿಯಾದ ನಂತರ, ತಹಶೀಲ್ದಾರ್ ಗ್ರೇಡ್-2 ವೃಂದದಿಂದ ತಹಶೀಲ್ದಾರ್ ಗ್ರೇಡ್-1 ವೃಂದಕ್ಕೆ 371ಜೆ ರಡಿಯಲ್ಲಿ ಅರ್ಹ ಅಧಿಕಾರಿಗಳಿಗೆ ನಿಯಮಾನುಸಾರ ಪರಿಶೀಲಿಸಿ, ಮುಂಬಡ್ತಿ ನೀಡಲಾಗಿದೆ. |
| ಈ | ಸಂವಿಧಾನದ 371 ಜೆ ಜಾರಿಯಾಗಿ 7 ವರ್ಷಗಳಾಗುತ್ತಾ ಬಂದರು ಅವರಿಗೆ ಮೀಸಲಾತಿ ಹಕ್ಕು ನೀಡದಿರುವುದು ಸಂವಿಧಾನ ಬಾಹಿರವಾಗಿಲ್ಲವೇ; ಹಾಗೂ ಅರ್ಹ ನೌಕರರಿಗೆ ಬಡ್ತಿ ನೀಡದೇ ವಿಳಂಬವಾಗಲು ಕಾರಣಗಳೇನು? | ಸಂವಿಧಾನದ 371ಜೆ ಅನುಸಾರ ಸ್ಥಳೀಯ ವೃಂದಕ್ಕೆ ಮೀಸಲಿರಿಸಲಾದ ಹುದ್ದೆಗಳಿಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಖಾಲಿ ಆಗುತ್ತಿರುವ ಹುದ್ದೆಗಳಿಗೆ ಅರ್ಹ ನೌಕರರಿಗೆ ಪದೋನ್ನತಿ ನೀಡುವ ಮೂಲಕ ಭರ್ತಿ ಮಾಡಲಾಗುತ್ತಿದೆ. |

ಇ-ಕಂಇ 273 ಬಿಎಂಎಂ 2021

(ಆರ್.ಅಶೋಕ)
ಕಂದಾಯ ಸಚಿವರು